ರಂದು ಪಾವತಿಸಿರುತ್ತಾರೆಂದು ಉಳಿಕೆ ಬಾಕಿ ಹಣ ಮತ್ತು ನೋಂದಣಿ ವೆಚ್ಚವನ್ನು ನಿಗಧಿತ ಅವಧಿಯಲ್ಲಿ ಪಾವತಿಸಿರುತ್ತಾರೆ ಎಂದು ಮಾರಾಟಾಧಿಕಾರಿಗಳು ವರದಿ ಮಾಡಿರುತ್ತಾರೆ.

ಬ್ಯಾಂಕಿನ ಕೋಲಾರ ಶಾಖೆಯ ಮಾರಾಟಾಧಿಕಾರಿಯವರು ದಿನಾಂಕ : 25–6–2012 ರಂದು ನಡೆಸಿದ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಮತ್ತು ನಿಯಮಗಳನ್ನು ಪಾಲಿಸಿ ಹರಾಜು ನಡವಳಿಕೆಯನ್ನು ಮಾಡಿ ಶ್ರೀ ಅಫ್ಜಲ್ ಪಾಷ ಬಿನ್ ಸರ್ದಾರ್ ಪಾಷರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಲು ಉಲ್ಲೇಖ (3) ರಂತೆ ಈ ಕಛೇರಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ : 25–6–2012 ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಹರಾಜಿನ ನಡವಳಿಯನ್ನು ಪರಿಶೀಲಿಸಿದಾಗ ಸ್ಥಿರಾಸ್ತಿ ಹರಾಜಿನಲ್ಲಿ ಒಟ್ಟು 5 ಜನ ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ ಮಾಡಿದ ಶ್ರೀ ಅಫ್ಜಲ್ ಪಾಷ ಬಿನ್ ಸರ್ದಾರ್ ಪಾಷ ಇವರಿಗೆ ರೂ. 550137/– ಗಳಿಗೆ ಮಾರಾಟವನ್ನು ನಿಲ್ಲಿಸಿರುವುದಾಗಿ ಮಾರಾಟಾಧಿಕಾರಿಯವರು ವರದಿ ಮಾಡಿದ್ದು, ಬಹಿರಂಗ ಹರಾಜ್ ನಡೆದ 30 ದಿನಗಳೊಳಗೆ ತೀರ್ಮ ಬಾಕಿದಾರರು ಬ್ಯಾಂಕಿಗೆ ಪಾವತಿಸಬೇಕಾದ ಬಾಕಿ ಮೊತ್ತವನ್ನು ಮರುಪಾವತಿ ಮಾಡದೆ ಇರುವುದರಿಂದ ಮತ್ತು ಈ ಬಗ್ಗೆ ಕಛೇರಿಗೆ ಯಾವುದೇ ಆಕ್ಷೇಪಣೆಗಳನ್ನು ಯಾರೂ ಸಲ್ಲಿಸದೆ ಇರುವ ಕಾರಣ ದಿನಾಂಕ : 25–6–2012 ರಂದು ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳ ಕಾನೂನು ಬದ್ಧವಾಗಿದೆಯೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ : ಸಸಸನಿ/ವ.ಅ./1/2012–13, ದಿನಾಂಕ : 27–9–2012.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ದೊಡ್ಡ ತಮ್ಮೇಗೌಡ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿ.ಎಂ.ಡಬ್ಲ್ಯೂ/69/ಸಿ.ಎಲ್.ಎಂ./2001 ದಿನಾಂಕ : 21–11–2001 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ : ಸಿ.ಇ.ಪಿ. ನಂ. 8/2005–06, ದಿನಾಂಕ : 8–11–2005 ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಶ್ರೀ ಎಸ್.ಜೆ. ಅನ್ವರ್ ಬಿನ್ ಸೈಯದ್ ಜಾಫರ್ ಸಾಬ್ ಮತ್ತು ಶ್ರೀಮತಿ ದಿಲ್ ಶಾದುನ್ನೀಸಾ ಕೋಂ॥ ಎಸ್.ಜೆ. ಅನ್ವರ್ ಇವರು ಬ್ಯಾಂಕಿಗೆ ಆಧಾರ ಮಾಡಿ ಕೊಟ್ಟಿರುವ ಸ್ಥಿರಾಸ್ತಿಯನ್ನು ದಿನಾಂಕ : 25–6–2012 ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಅಫ್ಜಲ್ ಪಾಷ ಬಿನ್ ಸರ್ದಾರ್ ಪಾಷ, ಮೆಹಬೂಬ್ ನಗರ, ಚಿಂತಾಮಣಿ ಟೌನ್, ಕೋಲಾರ ಜಿಲ್ಲೆ ಇವರು ಅತಿ ಹೆಚ್ಚಿನ ಬಿಡ್‌ದಾರರಾಗಿದ್ದು, ಇವರಿಗೆ ರೂ. 550137/– (ರೂ. ಐದು ಲಕ್ಷ ಐವತ್ತು ಸಾವಿರದ ಒಂದು ನೂರ ಮೂವತ್ತೇಳು ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸುತ್ತೇನೆ.

**: ಸ್ಥಿರಾಸ್ತಿಯ ವಿವರಗಳು :**

ಕೋಲಾರ ಜಿಲ್ಲೆ, ಚಿಂತಾಮಣಿ ತಾಲ್ಲೂಕ್, ಚಿಂತಾಮಣಿ ಟೌನ್, 5ನೇ ಡಿವಿಜನ್, ಮೆಹಬೂಬ್ ನಗರ, ಖಾತೆ ನಂ. 1111 ಅಸೆಸ್‌ಮೆಂಟ್ ನಂ. 1046 ರಲ್ಲಿರುವ ಕಟ್ಟಡ ಹಾಗೂ ಖಾಲಿ ನಿವೇಶನ.

**ವಿಸ್ತೀರ್ಣ :** ಪೂರ್ವ–ಪಶ್ಚಿಮ : 42 ಅಡಿಗಳು

ಉತ್ತರ–ದಕ್ಷಿಣ : 35 ಅಡಿಗಳು

**ಚೆಕ್ಕುಬಂದಿ**

ಪೂರ್ವ : ಪ್ರಭುರವರ ಮನೆ

ಪಶ್ಚಿಮ : ರಸ್ತೆ

ಉತ್ತರ : ರಾಮದಾಸ್ ಗಾರ್ಡನ್

ದಕ್ಷಿಣ : ರಸ್ತೆ

ಮಾರಾಟ ಬೆಲೆ : ರೂ. 5,50,137/–

ಮಾರಾಟದ ದಿನಾಂಕ : 25–06–2012

ಮೇಲ್ಕಂಡ ಸ್ಥಿರಾಸ್ತಿಯ ಸ್ಥಿಕರಣವನ್ನು ತೀರ್ಮ ಸಾಲಗಾರರು ಪಾವತಿಸಬೇಕಾಗಿರುವ ಬಾಕಿ ವಸೂಲಾತಿಗಾಗಿ ಸ್ಥಿರೀಕರಿಸಿ ಆದೇಶ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 27–9–2012 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹಾಗೂ ವಸೂಲಿ ಅಧಿಕಾರಿಗಳು (ನಿಯಮ 441),
ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ,
ಬೆಂಗಳೂರು–4

P.R. 35

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು–577101**

**ತಿದ್ದುಪಡಿ**

**ಸಂಖ್ಯೆ : ಕ.ಗಸಿಆರ್/ಜಲ್ಲಿ ಕ್ರಷರ್/ಅಧಿಸೂಚನೆ/2012–13, ದಿನಾಂಕ : 1–1–2013**

**ಸಂಖ್ಯೆ : ಕ.ಗ.ಸಿಆರ್/ಜಲ್ಲಿ ಕ್ರಷರ್/ಅಧಿಸೂಚನೆ/2012–13, ದಿನಾಂಕ : 11–10–13.**

**ವಿಷಯ :** ಚಿಕ್ಕಮಗಳೂರು ಜಿಲ್ಲೆಯಲ್ಲಿ ಜಲ್ಲಿ ಕ್ರಷರ್‌ಗಳನ್ನು ಸ್ಥಳಾಂತರಿಸಲು ಗುರುತಿಸಿರುವ ಸುರಕ್ಷಿತ ವಲಯಗಳ ಅಧಿಸೂಚನೆ ಪ್ರಕಟಿಸುವ ಬಗ್ಗೆ.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಸರ್ಕಾರಿ ಆದೇಶ ಸಂಖ್ಯೆ : ಕ.ಗ.ಸಿಆರ್/ಜಲ್ಲಿ ಕ್ರಷರ್/ಅಧಿಸೂಚನೆ/2012–13, ದಿನಾಂಕ: 11–10–2012ರ ಆದೇಶ ಭಾಗದ ಎರಡನೇ ಪಂಕ್ತಿಯ ಐದನೇ ಸಾಲಿನಲ್ಲಿರುವ 'ಅನುಮೋದನೆಗೊಂಡ ನಾಲ್ಕು ಸುರಕ್ಷಿತ ವಲಯದ ವಿವರಗಳನ್ನು ಸಾರ್ವಜನಿಕರ ಗಮನಕ್ಕೆ ತರಲು ಈ ಪ್ರಕಟಣೆ' ಎಂಬುದರ ಬದಲಾಗಿ 'ಚಿಕ್ಕಮಗಳೂರು ಜಿಲ್ಲೆಯಲ್ಲಿ ಜಲ್ಲಿ ಕ್ರಷರ್‌ಗಳನ್ನು ಸ್ಥಳಾಂತರಿಸಲು ಗುರುತಿಸಿ ಅನುಮೋದನೆಗೊಂಡಿರುವ ನಾಲ್ಕು ಪ್ರದೇಶಗಳನ್ನು ಸುರಕ್ಷಿತ ವಲಯಗಳು ಎಂದು ಘೋಷಿಸಿದೆ' ಎಂದು ತಿದ್ದಿ ಓದಿಕೊಳ್ಳತಕ್ಕದು.

ಮುಂದುವರೆದು, ಮೇಲಿನ ಆದೇಶ ಸಂಖ್ಯೆಯಲ್ಲಿ ಪ್ರಕಟಗೊಂಡ ಸುರಕ್ಷಿತ ವಲಯಗಳ ಪಟ್ಟಿಯ ನಾಲ್ಕನೇ ಸಾಲಿನ ಚಿಕ್ಕಮಗಳೂರು ತಾಲ್ಲೂಕು ಮರ್ಲೆ ಗ್ರಾಮದ ಸರ್ವೆ ನಂ. 34ರ ಬದಲಾಗಿ 134 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಜಿಲ್ಲಾಧಿಕಾರಿ**
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**P.R. 36**

## ಭೂ ದಾಖಲೆಗಳ ಜಂಟಿ ನಿರ್ದೇಶಕರು ಮರುಭೂಮಾಪನ ಬೆಳಗಾಂ

### ಅಧಿಸೂಚನೆ

**ಸಂಖ್ಯೆ : ಮರುಭೂಮಾಪನ : ನೋ–19/2012–13, ದಿನಾಂಕ : 10–9–2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ನಂ. ಕಂ.ಇ/29/ಭೂದಾಸ/2009, ದಿನಾಂಕ : 20–2–2009ರ ಮೇರೆಗೆ 109, 112 ಹಾಗೂ 152 ರಲ್ಲಿ ನಿಹಿತವಾದ ಅಧಿಕಾರದ ಮೇರೆಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಈ ಕೆಳಕಂಡ ಗ್ರಾಮದಲ್ಲಿ ಮರುಭೂಮಾಪನ ಹಾಗೂ ಮರುವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮಗಳ ಎಲ್ಲಾ ಹಿಡುವಳಿದಾರರು/ಮಾಲೀಕರು ಅಳತೆಗೆ ಬರತಕ್ಕ ಮೋಜಿಣಿದಾರರಿಗೆ ಅಗತ್ಯ ಸಹಾಯವನ್ನು (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ಪೂರೈಸತಕ್ಕದ್ದು.

| ಅ.ನಂ. | ತಾಲ್ಲೂಕು | ಗ್ರಾಮದ ಹೆಸರು |
|---|---|---|
| 1 | ಖಾನಾಪುರ | ಶಿವೋಲಿ |

**ಷರಾ** : ಭೂಮಾಪನಾ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

**ಭೂದಾಖಲೆಗಳ ಜಂಟಿ ನಿರ್ದೇಶಕರು,**
ಮರು ಭೂ ಮಾಪನ ಕಾರ್ಯಾಲಯ,
ಡಿ.ಸಿ. ಕಂಪೌಂಡ, ಬೆಳಗಾವಿ

**P.R. 46**

## ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹೊನ್ನಾವರ ವಿಭಾಗ, ಹೊನ್ನಾವರ ರವರ ನ್ಯಾಯಾಲಯ

### ಕಳ್ಳಸಾಗಾಣಿಕೆ ವಾಹನದ ಕುರಿತು ಪ್ರಕಟಣೆ

**ಕ್ರಮ ಸಂಖ್ಯೆ : ಸಿ3/ಎಫ್‌ಐಆರ್–1/ಅರ ಕೋಟಾ/ಮಂಕಿ/2011–12, ದಿನಾಂಕ : 31–12–2012.**

ದಿನಾಂಕ : 25–7–2011 ರಂದು ರಾತ್ರಿ ಸಮಯಕ್ಕೆ ಮಂಕಿ ವಲಯದ ಕೋಟಾ ರಸ್ತೆಯಿಂದ ಮಾರುತಿ ಓಮಿನಿ ವಾಹನ ನೋಂದಣಿ ಸಂಖ್ಯೆ: ಕೆಎ–05/7403ರಲ್ಲಿ ಅಕ್ರಮವಾಗಿ ಸಾಗ ಜಾತಿಯ ತುಂಡುಗಳನ್ನು ತುಂಬಿಕೊಂಡು ಕಳ್ಳಸಾಗಾಣಿಕೆಯಲ್ಲಿ ಸಾಗಾಟಪಡಿಸುತ್ತಿದ್ದಾಗ, ವಲಯ ಅರಣ್ಯಾಧಿಕಾರಿ, ಮಂಕಿ ರವರು ಅಟಕಾಯಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ : 1/2011–12, ದಿನಾಂಕ : 25–7–2011 ರಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 24(ಇ), 62, 71ಎ ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144ರ ಉಲ್ಲಂಘನೆ ಮೇರೆಗೆ ಗುನ್ನೆ ಪ್ರಕರಣ ದಾಖಲಿಸಿ ವಾಹನ ಸಂಖ್ಯೆ: ಕೆಎ–05/7403ನ್ನು ಅರಣ್ಯ ಉತ್ಪನ್ನ ಸಮೇತ ಜಪ್ತಿಪಡಿಸಿ ಪಂಚನಾಮೆಯಿಂದ ಅಮಾನತ್ತುಪಡಿಸಿಕೊಂಡು ಅರಣ್ಯ ಕಾಯ್ದೆ 1963ರ ನಿಯಮ 71(ಎ) ಯಿಂದ (ಜಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳ ಸಮಕ್ಷಮ ಹಾಜರುಪಡಿಸಿರುತ್ತಾರೆ. ಈ ರೀತಿ ವಶಪಡಿಸಿಕೊಂಡಿರುವ ಓಮಿನಿ ವಾಹನ ನೋಂದಣಿ ಸಂಖ್ಯೆ : ಕೆಎ–05/7403ರ ನೋಂದಾಯಿತ ಮಾಲೀಕತ್ವದ ವಿವರಗಳ ಕುರಿತಾಗಿ ದಿನಾಂಕ : 25–7–2011 ರಿಂದ ಇಲ್ಲಿಯವರೆಗೆ ಹೊನ್ನಾವರ ಹಾಗೂ ಬೆಂಗಳೂರು ಸಾರಿಗೆ ಪ್ರಾಧಿಕಾರದಲ್ಲಿ ಪತ್ರ ವ್ಯವಹರಿಸಲಾಗಿ, ಈವರೆಗೂ ವಾಹನ ಮಾಲೀಕತ್ವದ ವಿವರಗಳು ಈ ಕಛೇರಿಗೆ ಸ್ವೀಕೃತವಾಗಿರುವುದಿಲ್ಲ. ಅಲ್ಲದೇ, ಸದರ ವಾಹನ ತನ್ನದೆಂದು ಈವರೆಗೂ ಯಾರೂ ಈ ನ್ಯಾಯಾಲಯದಲ್ಲಿ ಕೋರಿಕೆ ಸಲ್ಲಿಸಿರುವುದಿಲ್ಲ.

ಆದ್ದರಿಂದ, ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ರಿಂದ (ಜಿ) 1 ಮತ್ತು 2ನೇ ತಿದ್ದುಪಡಿ ಪ್ರಕಾರ ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವ ವಾಹನ ಸಂಖ್ಯೆ : ಕೆಎ–05/7403ನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವ ಬಗ್ಗೆ ಸದರ ವಾಹನದ ಹಕ್ಕುಳ್ಳವರು ಮೂಲ ಆರ್.ಸಿ. ಹಾಗೂ ಟ್ಯಾಕ್ಸ್ ಕಾರ್ಡನೊಂದಿಗೆ 15 (ಹದಿನೈದು) ದಿನಗಳ ಒಳಗೆ ಖುದ್ದಾಗಿ ವಕೀಲರ ಮೂಲಕ ಈ ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆಯನ್ನು ಕೊಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಈ ಅಪರಾಧಕ್ಕೆ ಸಂಬಂಧಿಸಿ ಯಾರದೇ ಆಕ್ಷೇಪಣೆ ಇರುವುದಿಲ್ಲ ಅಂತ ಪರಿಗಣಿಸಿ ಸದರ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಹೊರಡಿಸಲಾಗುವುದು.

**ಉಪ ಅರಣ್ಯ ಸಂರಕ್ಷಣಾಧಿಕಾರಿ,**
ಹೊನ್ನಾವರ ವಿಭಾಗ, ಹೊನ್ನಾವರ.

**P.R. 49**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ ನಂ.2, ವಿಜಾಪೂರ

### ಪ್ರಕಟಣೆ

**ಸಂ : ಕಾ.ಅ.ಬಿ–2: ಕಾ.ನ.ಪ.ಮಪ್ರ.ಎಸ್.ಆರ್.ನಂ. 02/2013, ದಿನಾಂಕ : 5–1–2013.**

| ಅರ್ಜಿದಾರರು | ಪ್ರತಿವಾದಿಗಳು |
|---|---|
| ಶ್ರೀಮತಿ ಮಹಾದೇವಿ ಗಂಡ ಸಿದ್ದಪ್ಪ ನಾಯಕೋಡಿ, ಮತ್ತು ಇತರರು, ಸಾ:ಗಣಪತಿ ಚೌಕ, ವಿಜಾಪುರ ಜಿಲ್ಲೆ, ವಿಜಾಪುರ. | 1. ಟಿ.ಹೆಚ್. ನಾಸೀರ ತಂದೆ ಹಸನಬ್ಬ, ಸಾ: ಸೈಟ್ ನಂ. 187, 7ನೇ ಬ್ಲಾಕ್, ಶಹಾಪೇಠ, ಕೃಷ್ಣಾಪುರ (ಪಿ), ಮಂಗಳೂರು, ದಕ್ಷಿಣ ಕನ್ನಡ.<br>2. ದಿ ಮ್ಯಾನೇಜರ್ ಲೀಗಲ್, ಐ.ಸಿ.ಐ.ಸಿ.ಐ. ಜನರಲ್ ಇನ್ಸೂರನ್ಸ್ ಕಂ.ಲಿ., ಗುಲಬರ್ಗಾ. |

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಸಿದ್ದಪ್ಪ ತಂದೆ ಹಣಮಂತಪ್ಪ @ ಹಣಮಂತ್ರಾಯ ನಾಯಕೋಡಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ : 20–8–2012 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಡಿ.ಎಂ. ವಿನುತ**
ಕಾರ್ಮಿಕ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಪ ವಿಭಾಗ–2, ವಿಜಾಪೂರ.

**P.R. 52**

## ಭೂ ದಾಖಲೆಗಳ ಜಂಟಿ ನಿರ್ದೇಶಕರು ಮರುಭೂಮಾಪನ ಬೆಳಗಾವಿ

### ಅಧಿಸೂಚನೆ

**ಸಂಖ್ಯೆ: ಮರುಭೂಮಾಪನ:ನೋ–19/2012–13, ದಿನಾಂಕ: 10–09–2012**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ನಂ:ಕಂ.ಇ/29/ಭೂದಾಸ/2009 ದಿನಾಂಕ: 20–02–2009 ರ ಮೇರೆಗೆ 109, 112 ಹಾಗೂ 152 ರಲ್ಲಿ ನಿಹಿತವಾದ ಅಧಿಕಾರದ ಮೇರೆಗೆ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಈ ಕೆಳಕಂಡ ಗ್ರಾಮದಲ್ಲಿ ಮರುಭೂಮಾಪನ ಹಾಗೂ ಮರುವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮಗಳ ಎಲ್ಲಾ ಹಿಡುವಳಿದಾರರು / ಮಾಲೀಕರು ಅಳತೆಗೆ ಬರತಕ್ಕ ಮೋಜಣಿದಾರರಿಗೆ ಅಗತ್ಯ ಸಹಾಯವನ್ನು (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ಪೂರೈಸತಕ್ಕದ್ದು.

| ಅ.ನಂ | ತಾಲ್ಲೂಕು | ಗ್ರಾಮದ ಹೆಸರು |
|---|---|---|
| (1) | (2) | (3) |
| 1 | ಖಾನಾಪುರ | ಶಿವೋಲಿ |

**ಷರಾ:–** ಭೂಮಾಪನಾ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

ಭೂ. ದಾ.ಜಂ. ನಿ (ನಮಾ.ಉ.ವ) ಹಾಗೂ
ಪದನಿಮಿತ್ತ ಭೂ.ದಾ.ಜಂ.ನಿ (ಮಭೂ) ಬೆಳಗಾವಿ.

**P.R. 1574**

## ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ : ಕೇಂದ್ರ ಕಛೇರಿ : ಹುಬ್ಬಳ್ಳಿ

### ಸುತ್ತೋಲೆ

**ಸಂ:ವಾಕರಸಾ:ಕೇಕ:ಹು:ಸಿಬ್ಬಂದಿ:ಎ5:2451 ದಿನಾಂಕ: 11–09–2012**

**ಉಲ್ಲೇಖ:** ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಾರಿಇ 31 ವಾಈಸೇ 2012 ದಿನಾಂಕ: 07–09–2012.

ಉಲ್ಲೇಖಿತ ಆದೇಶದ ಮೇರೆಗೆ, ನಾನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕೇಂದ್ರ ಕಛೇರಿ, ಹುಬ್ಬಳ್ಳಿಯಲ್ಲಿ ದಿನಾಂಕ:10–09–2012 ರಂದು ವ್ಯವಸ್ಥಾಪಕ ನಿರ್ದೇಶಕ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡಿರುತ್ತೇನೆ.

ನನ್ನ ಕಾರ್ಯ ವ್ಯಾಪ್ತಿಗೆ ಸಂಬಂಧಿಸಿದ ಎಲ್ಲಾ ಗೌಪ್ಯ ಹಾಗೂ ಅರೆ ಸರ್ಕಾರಿ ಪತ್ರಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರುತ್ತೇನೆ.

ಮನೋಜ್ ಜೈನ್,
ವ್ಯವಸ್ಥಾಪಕ ನಿರ್ದೇಶಕರು,
ವಾ.ಕ.ರ.ಸಾ.ಸಂಸ್ಥೆ, ಕೇಂದ್ರ ಕಛೇರಿ
ಗೋಕುಲ ರಸ್ತೆ, ಹುಬ್ಬಳ್ಳಿ–580030

**ದೂರವಾಣಿ**

| | | |
|---|---|---|
| ಕಛೇರಿ | : | 0836–2333058 |
| ಮೊಬೈಲ್ ಸಂಖ್ಯೆ | : | 77609–91999 |
| ಫ್ಯಾಕ್ಸ್ ಸಂಖ್ಯೆ | : | 0836–2332103 |

**ಮನೋಜ್ ಜೈನ್**
ವ್ಯವಸ್ಥಾಪಕ ನಿರ್ದೇಶಕರು
ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ
ಕೇಂದ್ರ ಕಛೇರಿ: ಹುಬ್ಬಳ್ಳಿ

P.R. 1575

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಆರ್‌ಡಿ 12 ಎಲ್‌ಜಿಎಸ್ 2009(ಪಿ–1) ಬೆಂಗಳೂರು, ದಿನಾಂಕ: 10–12–2012

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 12 ಎಲ್‌ಜಿಎಸ್ 2009 (ಪಿ–1) ದಿನಾಂಕ: 06/12/2010ನ್ನು ಭಾಗಶ: ಮಾರ್ಪಡಿಸಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು, ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಶ್ರೀಮತಿ ಲಕ್ಷ್ಮೀ ಕೋ ಶಿವಪ್ಪ ಕಂಬಳಿಕೊಪ್ಪ ಕಲ್ಮನೆ ಅಂಚೆ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರ ಸ್ಥಾನದಲ್ಲಿ ಶ್ರೀಮತಿ ಸುಲೋಚನಾ ಕೋಂ, ಶ್ರೀಪಾದರಾವ್, ನರಸೀಪುರ ಅಂಚೆ, ಗೌತಮಪುರ, ಸಾಗರ ತಾಲ್ಲೂಕು, ಇವರನ್ನು ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ನಾಮನಿರ್ದೇಶನ ಮಾಡಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ–1)

P.R. 1598

## ಒಳಾಡಳಿತ ಸಚಿವಾಲಯ

### ಸುತ್ತೋಲೆ

### ಸಂಖ್ಯೆ: ಹೆಚ್‌ಡಿ 165 ಕೆಎಎ 2012 ಬೆಂಗಳೂರು, ದಿನಾಂಕ: 22–11–2012

**ವಿಷಯ :** ಆಯುಧ ಕಾಯ್ದೆಯಡಿಯಲ್ಲಿ ಪ್ರಾದೇಶಿಕ ಆಯುಕ್ತರಿಗೆ ಅಪೀಲು ಅಧಿಕಾರವನ್ನು ನೀಡುವ ಕುರಿತು.

**ಉಲ್ಲೇಖ :** ಅಧೀನ ಕಾರ್ಯದರ್ಶಿ, ಕೇಂದ್ರ ಗೃಹ ಮಂತ್ರಾಲಯರವರ ಪತ್ರ ಸಂಖ್ಯೆ: V-11026/49/2012-Arms ದಿನಾಂಕ: 18/10/2012

ಆಯುಧ ನಿಯಮ 1962ರ ನಿಯಮ 5(1)ರನ್ವಯ ಜಿಲ್ಲಾ ದಂಡಾಧಿಕಾರಿಗಳು ಹೊರಡಿಸಿದ ಆದೇಶದ ವಿರುದ್ಧ ವಿಭಾಗಾಧಿಕಾರಿಗಳಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು. ಕರ್ನಾಟಕ ರಾಜ್ಯದಲ್ಲಿ ವಿಭಾಗಾಧಿಕಾರಿಗಳ ಹುದ್ದೆಗಳನ್ನು ಕಂದಾಯ ಇಲಾಖೆಯ ಆದೇಶ ಸಂಖ್ಯೆ:ಕಂಎ 09 ಬಿಎಂ.ಎಂ 2003, ಬೆಂಗಳೂರು ದಿನಾಂಕ:08/09/2005ರಲ್ಲಿ ಪ್ರಾದೇಶಿಕ ಆಯುಕ್ತರು ಎಂದು ಪುನರ್‌ಪದನಾಮೀಕರಣಗೊಳಿಸಲಾಗಿರುವುದರಿಂದ, ಜಿಲ್ಲಾ ದಂಡಾಧಿಕಾರಿಯವರು ಹೊರಡಿಸಿದ ಆದೇಶದ ವಿರುದ್ಧ ಮೇಲನ್ಮವಿ ಸಲ್ಲಿಸಲು ಗೊಂದಲವೇರ್ಪಟ್ಟಿದೆ. ಭಾರತ ಸರ್ಕಾರದ ಗೃಹ ಮಂತ್ರಾಲಯದ ಅಧೀನ ಕಾರ್ಯದರ್ಶಿಯವರು; ದಿನಾಂಕ: 18–10–2012ರಂದು ನೀಡಿರುವ ಸ್ಪಷ್ಟೀಕರಣ ರೀತ್ಯಾ (ಪ್ರತಿ ಲಗತ್ತಿಸಿದೆ) ಈ ಹಿಂದೆ ಮೇಲ್ಮನವಿ ಪ್ರಾಧಿಕಾರಿಯಾಗಿ ವಿಭಾಗಾಧಿಕಾರಿಗಳು ನಿರ್ವಹಿಸುತ್ತಿದ್ದ ಕರ್ತವ್ಯ ಪ್ರಾದೇಶಿಕ ಆಯುಕ್ತರು ನಿರ್ವಹಿಸಬಹುದೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಸ್ಪಷ್ಟೀಕರಣ ಹಿನ್ನೆಲೆಯಲ್ಲಿ ಆಯುಧ ನಿಯಮ 1962 ನಿಯಮ 5(1)ರ ಪ್ರಕಾರ ಜಿಲ್ಲಾ ದಂಡಾಧಿಕಾರಿಗಳು ಹೊರಡಿಸಿದ ಆದೇಶದ ವಿರುದ್ಧ ಶಸ್ತ್ರಾಸ್ತ್ರ ಕಾಯ್ದೆ 1959 ಕಲಂ 18ರನ್ವಯ ತಕ್ಷಣದಿಂದ ಹಾಗೂ ಮುಂದಿನ ಆದೇಶದವರಿಗೆ ಪ್ರಾದೇಶಿಕ ಆಯುಕ್ತರು ಮೇಲ್ಮನವಿ ಪ್ರಾಧಿಕಾರವಾಗಿ ಕರ್ತವ್ಯ ನಿರ್ವಹಿಸತಕ್ಕದ್ದೆಂದು ಈ ಮೂಲಕ ಸೂಚಿಸಿದೆ.

**ಪ್ರಕಾಶ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 1530

**IN THE COURT OF COMMISSIONER FOR WORKMEN'S COMPENSATION BIDAR**

**NO. LOB/WCA/Cr-34/2012 Dated: 05/12/2012**

| **Applicants :** | **V/s** | **Respondents:** |
|---|---|---|
| 1) Smt. Asifa Begum w/o late Mohammed Qhadulla, aged 31 years Occ: Household R/o Mamadgi Tq Zahirabad and four others. | | 1) Mohammed Shahbuddin S/o Mussan Sab aged, Major Occu: Business R/o Jherasangam Mondal Taq Zahirabad Dist (madeak A.P.<br>2) M/s. Oriental Insurance Company Ltd, 1st floor, 6-2-376 Pavan Estate, Hyderabad |

## PROCLAMATION

Sri/Smt: Asifa Begam w/o late Mohammed W/o. Late Mohammed Qhadulla R/o Mamadgi Tq Zahirabad Dist. Hyderabad have/has filed application in this court claiming compensations stating that Late: Mahammed Qhudulla S/o Ismail sab was working as Driver under the Respondent No. 01 he met with an accident arising out of and during the course of employment as a result he died on 04-08-2012.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications on objections are received within the specified date the court will proceeded further in the matter.

Commissioner for Workmen's
Compensation, BIDAR

**P.R. 1566**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಲಾ 02 ಹೆಚ್‌ಆರ್‌ಸಿ 2012 ಬೆಂಗಳೂರು, ದಿನಾಂಕ: 15-12-2012

ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗದಲ್ಲಿ ಗುತ್ತಿಗೆ ಆಧಾರದ ಮೇಲೆ ವಿಲೇಖನಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಕೆ.ಹೆಚ್ ಮಲ್ಲೇಶಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ನೇಮಕಾತಿಯನ್ನು ದಿನಾಂಕ 26-11-2011 ರಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಹಾಗೂ ದಿನಾಂಕ 02-08-2013 ರವರೆಗೆ ವಿಲೇಖನಾಧಿಕಾರಿಯಾಗಿ ಅವರ ನೇಮಕಾತಿಯನ್ನು ಗುತ್ತಿಗೆ ಆಧಾರದ ಮೇಲೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ. ಗುತ್ತಿಗೆ ಆಧಾರದ ಮರುನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್, ರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ
(ಮಾನವ ಹಕ್ಕುಗಳು)

**P.R. 1595**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

### ನಂ.ಚು. (4) ಸಿಆರ್ 18/11-12, ದಿನಾಂಕ: 18-12-2012

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966ರ ಉಪಬಂಧಗಳ ಮತ್ತು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ನಿಯಮ 7ರ ಮೇರೆಗೆ ಜಿಲ್ಲಾಧಿಕಾರಿಗಳು ಶಿವಮೊಗ್ಗ ರವರ ಚುನಾವಣೆ ನೋಟೀಸು ಕ್ರಮಾಂಕ ಚು. (4)ಸಿಆರ್ 18/11-12 ದಿನಾಂಕ 26-11-2012 ರಂತೆ ನಿಗದಿಪಡಿಸಿದ ಚುನಾವಣಾ ವೇಳಾಪಟ್ಟಿ ಪ್ರಕಾರ ಹಾಗೂ ಕೃಷಿ ಮಾರಾಟ ನಿರ್ದೇಶಕರು ಕೃಷಿ ಇಲಾಖೆ ಬೆಂಗಳೂರು ರವರ ಪತ್ರ ನಂ. ಕೃಮಾಇ/25 ಚುನಾವಣೆ/2011 ದಿನಾಂಕ:27/06/11 ಮತ್ತು ಕೃಮಾಇ/25/ಚುನಾವಣೆ 2011 ದಿನಾಂಕ:16-10-2012 ರ ಪ್ರಕಾರ ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹನುಮಂತಾಪುರ ವ್ಯವಸಾಯಗಾರರ ಕ್ಷೇತ್ರ ಮತ್ತು ಮಾರುಕಟ್ಟೆ ಪ್ರದೇಶದೊಳಗೆ ಕೃಷಿ ಸಹಕಾರ ಸಂಸ್ಕರಣ ಸಹಕಾರ ಸಂಘ ಕ್ಷೇತ್ರದಿಂದ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಉಪಚುನಾವಣೆಯನ್ನು ನಡೆಸಲಾಗಿದೆ. ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ನಿಯಮ 37ರ ಪ್ರಕಾರ ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಗಳು ಘೋಷಿಸಿರುತ್ತಾರೆ.

ಆದ್ದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966ರ ಕಲಂ 27ರ ಮೇರೆಗೆ **ಎಂ.ವಿ. ವೇದಮೂರ್ತಿ**, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ಆದ ನಾನು ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹನುಮಂತಾಪುರ ವ್ಯವಸಾಯಗಾರರ ಕ್ಷೇತ್ರ ಮತ್ತು ಮಾರುಕಟ್ಟೆ ಪ್ರದೇಶದೊಳಗೆ ಕೃಷಿ ಸಹಕಾರ ಸಂಸ್ಕರಣ ಸಹಕಾರ ಸಂಘ ಕ್ಷೇತ್ರದ ಸ್ಥಾನಕ್ಕೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಗಿನಂತೆ ಪ್ರಕಟಿಸಿರುತ್ತೇನೆ.

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹೆಸರು : ಭದ್ರಾವತಿ**

| ಕ್ರಮ ಸಂಖ್ಯೆ | ಚುನಾವಣಾ ಕ್ಷೇತ್ರದ ಹೆಸರು | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| 1. | ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹನುಮಂತಾಪುರ ವ್ಯವಸಾಯಗಾರರ ಕ್ಷೇತ್ರ | ಬಿ. ಚಂದ್ರಪ್ಪ ಬಿನ್ ರುದ್ರಪ್ಪ ವ್ಯವಸಾಯಗಾರರು ಅರಹತೊಳಲು ಭದ್ರಾವತಿ ತಾಲ್ಲೂಕು |
| 2. | ಮಾರುಕಟ್ಟೆ ಪ್ರದೇಶದೊಳಗೆ ಕೃಷಿ ಸಹಕಾರ ಸಂಸ್ಕರಣ ಸಹಕಾರ ಸಂಘ ಕ್ಷೇತ್ರ | ಯ.ಗಂಗನಗೌಡ್ರು ಬಿನ್: ಮಹಾದೇವಪ್ಪ, ವ್ಯವಸಾಯಗಾರರು ಸನ್ಯಾಸಿಕೊಡಮಗ್ಗೆ ಹೊಸೂರು (ಅವಿರೋಧ ಆಯ್ಕೆ) |

**ಎಂ.ವಿ. ವೇದಮೂರ್ತಿ**
ಜಿಲ್ಲಾಧಿಕಾರಿಗಳು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**P.R. 1608**

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂ: ಸಾರಿಇ 212 ಸಾಇಪ 2012 ಬೆಂಗಳೂರು, ದಿನಾಂಕ: 21–12–2012**

ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ 1957 ಕಲಂ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಆದೇಶ ಸಂಖ್ಯೆ: ಸಾರಿಇ 06 ಸಾಇನಿ 2007, ದಿನಾಂಕ: 26–6–2007ರಲ್ಲಿ ಕರ್ನಾಟಕ ರಾಜ್ಯ ಅಂಗವಿಕಲರ ಪರಿಷತ್ ನಂ. 4/58, 2ನೇ ಮುಖ್ಯರಸ್ತೆ, ಕೋಕೋನಟ್ ಗಾರ್ಡನ್, 1ನೇ ಹಂತ, ನಾಗರಭಾವಿ, ಬೆಂಗಳೂರು–72 ಈ ಸಂಸ್ಥೆಯು ಹೊಂದಿರುವ ವಾಹನ ಸಂಖ್ಯೆ:ಕೆಎ 01–ಜಿಎ–0099 (ಟಾಟಾ ಸಫಾರಿ) ಮತ್ತು ವಾಹನ ಸಂಖ್ಯೆ:ಕೆಎ–04–ಜಿಎ–99 (ಕಾಂಟೇಸ್ಸ ಪೆಟ್ರೋಲ್) ವಾಹನಗಳಿಗೆ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿತ್ತು. ಆದರೆ ಸದರಿ ಆದೇಶದಲ್ಲಿ ವಿಧಿಸಿದ್ದ ಷರತ್ತುಗಳನ್ನು ಕರ್ನಾಟಕ ರಾಜ್ಯ ಅಂಗವಿಕಲರ ಪರಿಷತ್‌ಗೆ ವಿಧಿಸಿದ್ದ ಷರತ್ತುಗಳನ್ನು ಉಲ್ಲಂಘಿಸಿರುವ ಹಿನ್ನೆಲೆಯಲ್ಲಿ ವಾಹನ ಸಂಖ್ಯೆ: ಕೆಎ01–ಜಿಎ–1899 (ಟಾಟಾ ಸಫಾರಿ) ಮತ್ತು ವಾಹನ ಸಂಖ್ಯೆ: ಕೆಎ–04–ಜಿಎ–0099 (ಕಾಂಟೇಸ್ಸ ಪೆಟ್ರೋಲ್) ವಾಹನಗಳಿಗೆ ನೀಡಲಾಗಿದ್ದ ತೆರಿಗೆ ವಿನಾಯಿತಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೀರೇಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಾರಿಗೆ ಇಲಾಖೆ

**P.R. 1609**

## ಸಹಕಾರ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂ: ಸಇ 114 ರರವಿ 2012 ಬೆಂಗಳೂರು, ದಿನಾಂಕ: 14–08–2012**

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕಾರದ ಪ್ರಕರಣಗಳಲ್ಲಿ ಕಂಡಿಕೆವಾರು ಷರಾ/ ದಾಖಲೆಗಳು/ ಅರ್ಜಿಗೆ ಸಂಬಂಧಪಟ್ಟ ಕಡತಗಳು ಮಾಹಿತಿಗಳನ್ನು ನಿಗದಿತ ಅವಧಿಯಲ್ಲಿ ಸರ್ಕಾರಿ ವಕೀಲರಿಗೆ ಒದಗಿಸಲು ಶ್ರೀ ಆರ್.ಎಸ್. ಇಟಗಿ, ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ, ಇವರನ್ನು ಸಹಕಾರ ಇಲಾಖೆಯ ನೋಡಲ್ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

ದೂರವಾಣಿ ಸಂಖ್ಯೆ: (ಕಛೇರಿ) 22353951, 22032521

ದೂರವಾಣಿ ಸಂಖ್ಯೆ: (ನಿವಾಸ)

ಮೊಬೈಲ್ ಸಂಖ್ಯೆ: 99454 32316

ಇ–ಮೇಲ್ ವಿಳಾಸ : deputysecretary@ymail.com

**ಸಿ.ಕೆ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

**P.R. 1610**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿ:ಎಎಫ್:ಎಸ್‌ಆರ್/30–2012, ದಿನಾಂಕ: 14–12–2012**

| **ಅರ್ಜಿದಾರರು:** | **ಪ್ರತಿವಾದಿಗಳು** |
|---|---|
| ಶ್ರೀ ಸಿ.ಸಿ. ಮಂಜುನಾಥ ಬಿನ್ ಚನ್ನಪ್ಪಗೌಡ ಮತ್ತು ಇತರರು ಆಡುವಳ್ಳಿ ಬಡವಾಣೆ. ಹಾಸನ ತಾಲ್ಲೂಕು | 1) ಶ್ರೀಮತಿ ಜಯಶ್ರೀ ಕೋಂ ಮೋಹನ್ ಡೋರ್ ನಂ–44, ಶ್ರೀ ದೇವಿಕಾ ಕೃಪಾ ಕಿಮ್ಕೋ ಮುಂಭಾಗ ಬಿ.ಎಂ. ರಸ್ತೆ, ಹಾಸನ<br>2) ವ್ಯವಸ್ಥಾಪಕರು, ರಿಲೆಯನ್ಸ್ ಜನರಲ್ ಇನ್ಸೂರೆನ್ಸ್, ಕಂಪೆನಿ, ಹಾಸನ |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, **ಶ್ರೀ ಅಮರ್ ಬಿನ್ ಮಂಜುನಾಥ** ರವರು ಒಂದನೇ ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:21–05–2012ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಮತ್ತು ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಕೆ.ಎನ್. ಪ್ರಹ್ಲಾದ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ. ಹಾಸನ.

**P.R. 1612**

## FORM NO. 155

**[Members' Voluntary Winding-up]**

**Name of company: LFM Mohta AIK Limited**

**Notice convening final meeting**

Notice is hereby given in pursuance of section 497 that a General Meeting(final meeting) of the members of the above named company will be held at the Registered office of the Company situated at No.255/15, New No.29, 5th Main 13th Cross, Vyalikawal, Bangalore-560003 on the **30th day of March 2013 at 10.30 A.M** for the purpose of having an account laid before them showing the manner in which the winding-up has been conducted and the property of the Company disposed off and of hearing any explanation that may be given by the Liquidator and also of determining by a special resolution of the Company, the manner in which the books, accounts and documents of the company and of the liquidator shall be disposed off.

Dated this 2nd day of February, 2013

**Vijayakrishna KT**
Liquidator

**PD -28**

## FORM NO. 155

**[Members' Voluntary Winding-up]**

**Name of company: Mohta Udyog Limited**

**Notice convening final meeting**

Notice is hereby given in pursuance of section 497 that a General Meeting(final meeting) of the members of the above named company will be held at the Registered office of the Company situated at No.255/15, New No.29, 5th Main 13th Cross, Vyalikawal, Bangalore-560003 on the **30th day of March 2013 at 11.30 A.M** for the purpose of having an account laid before them showing the manner in which the winding-up has been conducted and the property of the Company disposed off and of hearing any explanation that may be given by the Liquidator and also of determining by a special resolution of the Company, the manner in which the books, accounts and documents of the company and of the liquidator shall be disposed off.

Dated this 2nd day of February, 2013

**Vijayakrishna KT**
Liquidator

**PD -27**

## ಜಿಲ್ಲಾಧಿಕಾರಿಯವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

**ಸಂಖ್ಯೆ: ಎಂಎಎಸ್/ಸಿಆರ್–2451 /2012–13/ ದಿನಾಂಕ: 16–02–2013**

**ವಿಷಯ:–** ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ. 2011 ರಂತೆ ಕೋಲಾರ ಜಿಲ್ಲೆಯಲ್ಲಿ ಕಲ್ಲುಪುಡಿ ಮಾಡುವ ಘಟಕಗಳಿಗೆ ಸುರಕ್ಷಿತಾ ವಲಯ ಘೋಷಣೆ ಮಾಡುವ ಕುರಿತು.

**ಉಲ್ಲೇಖ:–**
1. ದಿನಾಂಕ: 01.09.2012 ರಂದು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿ ಸಭೆಯ ಮುಂದುವರೆದ ಸರ್ಕುಲರ್ ನಡುವಳಿಯಂತೆ.
2. ಉಪಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ ಪತ್ರ ಸಂಖ್ಯೆ:ಎ7 ಕಲ್ಲುಗಣಿ/ ಸಿಆರ್. 103/ 2008–09/ ದಿನಾಂಕ: 10.10.2012.
3. ಈ ಕಛೇರಿ ಪತ್ರ ಸಂಖ್ಯೆ:ಎಂಎಎಸ್/ಸಿಆರ್–2451/2012–13/ದಿನಾಂಕ: 10.12.2012.
4. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಸೇಫರ್ ಜೋನ್ ವಲಯ ದೃಢೀಕರಣ ಪರವಾನಿಗೆ ಪತ್ರ ಸಂಖ್ಯೆ: 149/ಪಿಸಿಬಿ–75/ಎಂಐಎನ್/2012–13/6173/ ದಿನಾಂಕ: 27.12.2012.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ 2011 ರ ನಿಯಮ 6(5) ರಂತೆ ಈ ಕೆಳಗೆ ನಮೂದಿಸಿರುವ ಪ್ರದೇಶಗಳನ್ನು ಕಲ್ಲುಪುಡಿ ಮಾಡುವ ಘಟಕಗಳನ್ನು (ಕ್ರಷರ್‌ಗಳನ್ನು) ಸ್ಥಾಪಿಸಲು ಉಲ್ಲೇಖ 1 ಮತ್ತು 2 ರಂತೆ ಸುರಕ್ಷಿತ ವಲಯವೆಂದು ಗುರುತಿಸಿದ್ದು, ಇದನ್ನು ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಕಲ್ಲುಪುಡಿ ಮಾಡುವ ಘಟಕಗಳನ್ನು ನಡೆಸುವವರು ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ 2011 ರ ನಿಯಮ 3(2) ರಂತೆ ಈ ಅಧಿಸೂಚನೆ ಜಾರಿಗೆ ಬಂದ ದಿನಾಂಕದಿಂದ ಯಾವುದೇ ಪ್ರಾಧಿಕಾರದಿಂದ ನೀಡಲಾದ ಲೈಸನ್ಸ್‌ನೊಂದಿಗೆ ಕಲ್ಲುಪುಡಿ ಮಾಡುವ ಘಟಕದ ವ್ಯವಹಾರವನ್ನು ನಡೆಸುತ್ತಿರುವ ಯವೊಬ್ಬ ವ್ಯಕ್ತಿಯು ಮೂರು ತಿಂಗಳೊಳಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಲೈಸನ್ಸ್ ದೊರೆತ ಮೇಲೆ ತಮ್ಮ ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕವನ್ನು ಆರು ತಿಂಗಳೊಳಗಾಗಿ ಸುರಕ್ಷಿತಾ ವಲಯಕ್ಕೆ ಸ್ಥಳಾಂತರಿಸತಕ್ಕದ್ದು.

ಕಲ್ಲುಪುಡಿ ಮಾಡುವ ವ್ಯವಹಾರಗಳನ್ನು ಕೈಗೊಳ್ಳಲು ಲೈಸನ್ಸ್ ಮಂಜೂರಾತಿಗಾಗಿ ಅಗತ್ಯ ದಸ್ತಾವೇಜುಗಳು ಮತ್ತು ನಿಗದಿತ ಶುಲ್ಕಗಳೊಡನೆ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳಾದ ಹಿರಿಯ ಭೂವಿಜ್ಞಾನಿಗಳು, ಕೋಲಾರ ಜಿಲ್ಲೆ, ಕೋಲಾರ ಇವರಿಗೆ ಸಲ್ಲಿಸತಕ್ಕದ್ದು,

ಲೈಸನ್ಸ್ ಮಂಜೂರಾತಿ ಅಥವಾ ನಿರಾಕರಣೆಯನ್ನು ಸ್ಥಳ ಪರಿಶೀಲನೆ, ಲೈಸನ್ಸ್ ಇತರೆ ಷರತ್ತುಗಳ ನೆರವೇರಿಕೆಯ ಬಗ್ಗೆ ಪರಿಶೀಲಿಸಿದ ತರುವಾಯ ಮಾಡಲಾಗುವುದು. ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳಿಗಾಗಿ (ಕ್ರಷರ್‌ಗಳಿಗಾಗಿ) ಗುರುತಿಸಿರುವ ಸುರಕ್ಷಿತಾ ವಲಯದ ವಿವರಗಳು ಈ ಕೆಳಕಂಡಂತಿವೆ. ಈ ಜಮೀನುಗಳು ಕೃಷಿ ಚಟುವಟಿಕೆಗಳಿಗೆ ಯೋಗ್ಯವಾಗಿರುವುದಿಲ್ಲ. ಆದ್ದರಿಂದ ಕೃಷಿಯೇತರ ಚಟುವಟಿಕೆಗಳಿಗೆ ಬಳಸಿಕೊಳ್ಳಬಹುದಾಗಿದೆ.

**1. ದೇವರಾಯಸಮುದ್ರ ಗ್ರಾಮದ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ಸುರಕ್ಷಿತಾ ವಲಯ**

| ಕ್ರ..ಸಂ. | ತಾಲ್ಲೂಕು | ಗ್ರಾಮ | ಸರ್ವೆ ನಂ | ವಿಸ್ತೀರ್ಣ (ಎಕರೆಗಳಲ್ಲಿ) ಎಕರೆ/ಗುಂಟೆ | ಜಮೀನಿನ ವರ್ಗೀಕರಣ |
|---|---|---|---|---|---|
| 1 | ಮುಳಬಾಗಿಲು | ದೇವರಾಯಸಮುದ್ರ | 790 | 6–23 | ಖಾಸಗಿ ಜಮೀನು |
| | | | 784 | 3–18 | ಖಾಸಗಿ ಜಮೀನು |
| | | | 192 | 7–06 | ಖಾಸಗಿ ಜಮೀನು |
| | | | 193 | 1–27 | ಖಾಸಗಿ ಜಮೀನು |
| | | | 754 | 3–09 | ಖಾಸಗಿ ಜಮೀನು |
| | | | 720 | 3–00 | ಖಾಸಗಿ ಜಮೀನು |
| | | | 753 | 3–00 | ಖಾಸಗಿ ಜಮೀನು |
| | | | 758 | 4–38 | ಖಾಸಗಿ ಜಮೀನು |
| | | | 194 | 3–12 | ಖಾಸಗಿ ಜಮೀನು |
| | | | **ಒಟ್ಟು** | **36–13** | |

ಈ ಮೇಲ್ಕಂಡ ಕಲ್ಲುಪುಡಿ ಮಾಡುವ (ಸ್ಟೋನ್ ಕ್ರಷರ್) ಸುರಕ್ಷಿತ ವಲಯಕ್ಕೆ ಅರಣ್ಯ, ವ್ಯವಸಾಯ ಮತ್ತು ಗಣಿ ಮತ್ತು ಭೂವಿಜ್ಞಾನ ಇಲಾಖೆಗಳು ಒಪ್ಪಿಗೆಯನ್ನು ಸೂಚಿಸಿರುತ್ತಾರೆ.

ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರು ವಿಧಿಸಿರುವ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. 100 meters Buffer zone shall be maintained from the boundary of cultivated/settlement land or any other existing structures (located aduacent to the proposed safer zone
2. Action shall be initiated to construct an appropriate boundary around the safer zone and there shall be planting of tall growing foliage bearing perennial trees all along the boundaries. At least five such rows of tall growing leafy trees shall form a curtain to the surrounding area so that there is no escape of dust particles to its surrounding limits.
3. Each Stone Cursher shall be allocated with a minimum area of 1 acre of land in the Safer Zone as per the requirement of the Karnataka Regulation of Stone Crusher Act 2011.
4. Link roads and internal roads within the Safer Zone shall be properly tarred and maintained, so the fugitive emissions are reduced. The ambient air quality in the Safer Zone shall confirm to the National Ambient Air Quality Standards as specified in Environment (Protection) Seventh Amendment Rules. 2009.
5. The entire area shall have a planned rain water harvesting system so that the location is reliant as far as water requirement is concerned.
6. This Notification is subject to any judgement/s of the Hon'ble Supreme court or Hon'ble High court of Karnataka or any other courts that may be pronounced from time to time in the said matter of Safer Zone.
7. The applicant shall shift the Crushers to the Safer Zone within the time prescribed under the Karnataka Regulation of Stone Crushers Act. 2011.
8. There shall not be any complaint w.r.t. water and air pollution against the crusher proposed to be established in the Safer Zone.

This Notification is subjected to the conditions of the Karnataka Regulation of Stone Crushers Act. 2011 and rules, 2012.

ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ.

PR.159

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು.**

**ಎಫ್.ಓ.ಸಿ ಸಂಖ್ಯೆ:199/1997–98, ದಿನಾಂಕ:06/02/2012.**

**ಸಂಖ್ಯೆ:ಎ1.ಅಅಪ್ರ.71A.199/97–98, ದಿನಾಂಕ: 17/12/2012.**

**ಪ್ರಕಟಣೆ.**

ದಿನಾಂಕ:04–10–1997ರಂದು ವನ್ಯಜೀವಿ ಸಂರಕ್ಷಣಾ ಕಾಯ್ದೆ ಉಲ್ಲಂಘನೆ ಬಗ್ಗೆ ದೊರೆತ ಖಚಿತ ಮಾಹಿತಿ ಮೇರೆಗೆ ಬೆಂಗಳೂರಿನ ಅಶೋಕನಗರ ಪೊಲೀಸ್ ಠಾಣೆಯಿಂದ ಒಬ್ಬ ಆರೋಪಿಯನ್ನು ದಸ್ತಗಿರಿ ಮಾಡಿ ಅಕ್ರಮವಾಗಿ ಕಾಡುಕೋಣದ ಕೊಂಬು ಹಾಗೂ ಮೊಸಳೆ ಚರ್ಮವನ್ನು ಸಾಗಣೆ ಮಾಡಲು ಉಪಯೋಗಿಸಿದ್ದ ಫಿಯೇಟ್ ಕಾರು ಸಂಖ್ಯೆ:**CNZ**–2937 ಅನ್ನು ಜಪ್ತುಪಡಿಸಿಕೊಂಡು ಕ್ರೈಂ ನಂ.754/97–98ರಲ್ಲಿ ಪ್ರಕರಣವನ್ನು ದಾಖಲಿಸಿ ಮಾಲು ಸಹಿತ ವಾಹನವನ್ನು ಮುಂದಿನ ಕ್ರಮಕ್ಕಾಗಿ ಈ ಕಛೇರಿಯ ವಶಕ್ಕೆ ನೀಡಿರುತ್ತಾರೆ (ಈ ಕಛೇರಿಯ ವನ್ಯಜೀವಿ ಅಪರಾಧ ಮೊಕದ್ದಮೆ ಸಂಖ್ಯೆ:199/1997–98, ದಿನಾಂಕ:06–02–1998).

ಸದರಿ ವಾಹನದ ವಾರಸುದಾರರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗದೇ ಇರುವ ಕಾರಣ, ಈ ಕೆಳಗೆ ಮಾಹಿತಿ ನೀಡಿದ ವಾಹನದ ವಾರಸುದಾರರು ಅಥವಾ ವಾರಸುದಾರರ ಪರ ವಕೀಲರು ಯಾರಾದರೂ ಇದ್ದಲ್ಲಿ ಈ ಪ್ರಕಟಣೆಯು ಪ್ರಕಟವಾದ ದಿನಾಂಕದಿಂದ 30 (ಮೂವತ್ತು) ದಿವಸದೊಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗುವುದು. ತಪ್ಪಿದ್ದಲ್ಲಿ ವಾಹನದ ವಾರಸುದಾರರು ಯಾರು ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆಯಲ್ಲಿನ ಕಲಂಗಳಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮುಂದಿನ ಕ್ರಮ ಜರುಗಿಸಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ವನ್ಯಜೀವಿ ಅಪರಾಧ ಸಂಖ್ಯೆ ಮತ್ತು ದಿನಾಂಕ | ವಾಹನದ ನೊಂದಣಿ ಸಂಖ್ಯೆ | ವಾಹನದ ಮಾದರಿ |
|---|---|---|---|
| 1 | ಕ್ರೈಂ ನಂ.754/97–98, ದಿನಾಂಕ:04–10–1997<br>ಎಫ್ಓಸಿ ನಂ:199/1997–98, ದಿನಾಂಕ:06–02–1998 | **CNZ**–2937 | **Fiat Car** |

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

PR.1602

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು.**

**ಎಫ್.ಓ.ಸಿ ಸಂಖ್ಯೆ:88/2012–13, ದಿನಾಂಕ:08/11/2012.**

**ಸಂಖ್ಯೆ:ಎ1.ಅಅಪ್ರ.71A.88/12–13, ದಿನಾಂಕ: 29/11/2012.**

**ಪತ್ರಿಕಾ ಪ್ರಕಟಣೆ.**

ದಿನಾಂಕ:08–11–2012ರಂದು ಬೆಳಗ್ಗೆ ಬೆಂಗಳೂರು ಅರಣ್ಯ ಸಂಚಾರಿ ದಳದ ವ್ಯಾಪ್ತಿಯಲ್ಲಿರುವ ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಲ್ಲಿ ಸಿಬ್ಬಂದಿ ತಪಾಸಣಾ ಕಾರ್ಯದಲ್ಲಿದ್ದಾಗ ಹೊಸಕೋಟೆಯಿಂದ ಬೆಂಗಳೂರು ಕಡೆಗೆ ಬರುತ್ತಿದ್ದ ನೊಂದಣಿ ಸಂಖ್ಯೆಯ ನಾಮಫಲಕವಿಲ್ಲದ ಮಿನಿ ವಾಹನವನ್ನು ತಪಾಸಣೆಗಾಗಿ ನಿಲ್ಲಿಸಲು ಸೂಚಿಸಲಾಗಿ, ವಾಹನವು ನಿಲ್ಲಿಸದೇ ವೇಗವಾಗಿ ಚಲಿಸಿದ ಕಾರಣ, ಸದರಿ ವಾಹನವನ್ನು ಹಿಂಬಾಲಿಸಿ ತಡೆದು, ನಿಲ್ಲಿಸಲು ಸೂಚಿಸಿದಾಗ ವಾಹನದಲ್ಲಿದ್ದ ಇಬ್ಬರು ಆಸಾಮಿಗಳು ಓಡಿ ಪರಾರಿಯಾಗಿರುತ್ತದೆ. ವಾಹನವನ್ನು ಪರಿಶೀಲಿಸಲಾಗಿ, ವಾಹನದ ಮೇಲ್ಭಾಗದಲ್ಲಿ ಉಪ್ಪಿನ ಮೂಟೆಗಳು ತುಂಬಿದ್ದು, ಅದರ ಕೆಳಭಾಗದಲ್ಲಿ ಮರದ ತುಂಡುಗಳಿರುವುದು ಕಂಡುಬಂದಿತು. ನಂತರ ವಾಹನದಲ್ಲಿ ತುಂಬಿದ್ದ ಮರದ ತುಂಡುಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ಅವು ರಕ್ತಚಂಧನ ಮರದ ಜಾತಿಗೆ ಸೇರಿದ್ದು, ಒಟ್ಟು 56 ತುಂಡುಗಳ ಒಟ್ಟು ಅಳತೆ 0.499 ಘನ ಮೀಟರ್ ಹಾಗೂ 12 ರಕ್ತಚಂಧನ ಮರದ ಪೋಲ್ಸ್‌ಗಳು ಇರುತ್ತದೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 71ಎ, 79, 80 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144 ಉಲ್ಲಂಘಿಸಿರುವ ಕಾರಣ, ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:88/2012–13 ದಾಖಲಿಸಿ ಟಾಟಾ ಕಂಪನಿಯ ಸೂಪರ್ ಏಸ್ ವಾಹನವನ್ನು ಮಾಲು ಸಮೇತ ಸರ್ಕಾರದ ಪರ ಅಮಾನತ್ತುಪಡಿಸಿದೆ.

ಸರ್ಕಾರದ ಪರ ಅಮಾನತ್ತುಪಡಿಸಿಕೊಂಡಿರುವ ಟಾಟಾ ಕಂಪನಿಯ ಸೂಪರ್ ಏಸ್ ವಾಹನಕ್ಕೆ ನೊಂದಣಿ ಸಂಖ್ಯೆ ನಾಮಫಲಕ ಲಭ್ಯವಿಲ್ಲದ ಕಾರಣ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ವ್ಯವಹರಿಸಲು ಸಾಧ್ಯವಿರುವುದಿಲ್ಲ.

ಆದುದರಿಂದ ಈ ಕೆಳಗೆ ಮಾಹಿತಿ ನೀಡಿರುವ ವಾಹನದ ವಾರಸುದಾರರು ಅಥವಾ ವಾರಸುದಾರರ ಪರ ವಕೀಲರು ಯಾರಾದರೂ ಇದ್ದಲ್ಲಿ ಈ ಪ್ರಕಟಣೆಯು ಪ್ರಕಟವಾದ ದಿನಾಂಕದಿಂದ 30 (ಮೂವತ್ತು) ದಿವಸದೊಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗುವುದು. ತಪ್ಪಿದ್ದಲ್ಲಿ ವಾಹನದ ವಾರಸುದಾರರು ಯಾರು ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆಯಲ್ಲಿನ ಕಲಂಗಳಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮುಂದಿನ ಕ್ರಮ ಜರುಗಿಸಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ಅರಣ್ಯ ಅಪರಾಧ ಸಂಖ್ಯೆ ಮತ್ತು ದಿನಾಂಕ | ವಾಹನದ ನೊಂದಣಿ ಸಂಖ್ಯೆ | ವಾಹನದ ವಿವರ |
|---|---|---|---|
| 1 | ಸಂಖ್ಯೆ:88/2012–13,<br>ದಿನಾಂಕ:08–11–2012 | ಲಭ್ಯವಿರುವುದಿಲ್ಲ | ಟಾಟಾ ಕಂಪನಿಯ ಸೂಪರ್ ಏಸ್ ವಾಹನ.<br>**TATA Super ACE**,<br>**Engine No**.12H0568 –**M**8**H**1232<br>**Chassis No**. **MAT**483139**CYH**21351 |

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**PR.1572**

**ಕೃಷಿ ಮಾರಾಟ ಇಲಾಖೆ**

**ಅಧಿಸೂಚನೆ**

**ಸಂ:ಕೃಮಾಇ/388/ನಿಯವಿ/2012, ಬೆಂಗಳೂರು, ದಿ: 26/01/2013**

ಹೊನ್ನಾವರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಹೊನ್ನಾವರ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು 'ಮಾರುಕಟ್ಟೆ' ಎಂದು ಹಾಗೂ ಟೌನ್ ಮುನಿಸಿಫಲ್ ಪರಿಮಿತಿಯೊಳಗೆ ವ್ಯಾಪಾರ ವಹಿವಾಟು ನಡೆಯುವ ಪ್ರದೇಶವನ್ನು 'ಮಾರುಕಟ್ಟೆ ಪ್ರಾಂಗಣ' ಎಂದು ಹಾಗೂ ಮೋಜಣಿ ಸಂ:511 ಮತ್ತು 512ನ್ನು ಒಳಗೊಂಡ 4 ಎಕರೆ 20 ಗುಂಟೆಯ ಸೀಮಾಬದ್ಧ ಸ್ಥಳವನ್ನು 'ಮಾರುಕಟ್ಟೆ ಉಪ ಪ್ರಾಂಗಣ' ಎಂದು ಕ್ರಮವಾಗಿ ಅಧಿಸೂಚನೆ ಸಂ:ಎಂಡಿ/ಬಿವೈಎಲ್/4933/ಆರ್&ಇ/75–76, ದಿ:18/06/1975 ಮತ್ತು ಅಧಿಸೂಚನೆ ಸಂ:ರಾಮಾಇ/389/ನಿಯವಿ/86, ದಿ:30/09/1987 ರಲ್ಲಿ ಘೋಷಿಸಲಾಗಿದೆ. ಸದರಿ ಅಧಿಸೂಚನೆಯಲ್ಲಿ ಮಾರುಕಟ್ಟೆ ಪ್ರಾಂಗಣ ಹಾಗೂ ಮಾರುಕಟ್ಟೆ ಉಪ ಪ್ರಾಂಗಣಗಳಲ್ಲಿ ವ್ಯವಹರಿಸುವ ಕೃಷಿ ಉತ್ಪನ್ನಗಳನ್ನು ನಿರ್ದಿಷ್ಟಪಡಿಸಲಾಗಿದೆ.

ಹೊನ್ನಾವರ–ಅರೆಅಂಗಡಿ ರಾಮತೀರ್ಥ ರಸ್ತೆಯ ಪಕ್ಕದಲ್ಲಿರುವ 15–33–00 ಎಕರೆ ಜಮೀನನ್ನು ಸಮಿತಿಯು ಭೂಸ್ವಾಧೀನ ಪಡಿಸಿಕೊಂಡು ಅಧಿಸೂಚಿತ ಕೃಷಿ ಉತ್ಪನ್ನಗಳ ವ್ಯಾಪಾರ ವಹಿವಾಟಿಗಾಗಿ ಮಾರುಕಟ್ಟೆ ಪ್ರಾಂಗಣವನ್ನು ಅಭಿವೃದ್ಧಿಪಡಿಸಿ ಮೂಲಭೂತ ಸೌಕರ್ಯಗಳನ್ನು ಒದಗಿಸಿದ್ದು ಹಾಲಿ ಮಾರುಕಟ್ಟೆ ಪ್ರಾಂಗಣ ಹಾಗೂ ಉಪ ಪ್ರಾಂಗಣವನ್ನು ಅಪವರ್ಜಿಸಿ ಅಭಿವೃದ್ಧಿಪಡಿಸಿರುವ ಸಮಿತಿಯ ಸ್ವಂತ ಪ್ರಾಂಗಣಕ್ಕೆ ವ್ಯಾಪಾರ ವಹಿವಾಟನ್ನು ಸ್ಥಳಾಂತರಗೊಳಿಸಲು ಉದ್ದೇಶಿಸಿದೆ.

ಆದ್ದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 6ರ ಉಪ ಪ್ರಕರಣ 3 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಎಸ್.ಶಂಕರನಾರಾಯಣ ಆದ

ನಾನು ಹೊನ್ನಾವರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಹೊನ್ನಾವರ ಪಟ್ಟಣ ಪುರಸಭಾ ಪರಿಮಿತಿಯೊಳಗಿರುವ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಈ ಕೆಳಕಂಡಂತೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಲು ಈ ಮೂಲಕ ಪ್ರಕಟಿಸಿದ್ದೇನೆ.

**ಕೃಷಿ ಉತ್ಪನ್ನಗಳು**

1.ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70. ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋಠ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

**:: ಅನುಸೂಚಿ ::**

ಹೊನ್ನಾವರ ಪಟ್ಟಣ ಪುರಸಭಾ ಪರಿಮಿತಿಯೊಳಗಿರುವ ಹೊನ್ನಾವರ–ರಾಮ ತೀರ್ಥ ರಸ್ತೆ ಪಕ್ಕದಲ್ಲಿರುವ ಸಮಿತಿಗೆ ಸೇರಿದ 15–33–00 ಎಕರೆ ಜಮೀನಿನ ಈ ಕೆಳಗಿನ ಸೀಮಾಬದ್ದ ಸ್ಥಳ.

ಪೂರ್ವಕ್ಕೆ : ಅರಣ್ಯ ಇಲಾಖೆಗೆ ಸಂಬಂಧಿಸಿದ ಕ್ಷೇತ್ರ

ಪಶ್ಚಿಮಕ್ಕೆ : ಹೊನ್ನಾವರ–ಅರೆಅಂಗಡಿ ರಸ್ತೆ.

ದಕ್ಷಿಣಕ್ಕೆ : ಖಾಸಗಿಯವರ ರಸ್ತೆ.

ಉತ್ತರಕ್ಕೆ : ಶ್ರೀ ಬಲಿ ಮನೆಯವರ ಮನೆತನಕ್ಕೆ ಸೇರಿದ ಮಾಲ್ಕಿ ಭೂಕ್ಷೇತ್ರ.

ಮೇಲಿನ ಉದ್ದೇಶಿತ ಪ್ರಸ್ತಾವಕ್ಕೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 3 ರನ್ವಯ ಆಕ್ಷೇಪಣೆ / ಸಲಹೆಗಳನ್ನು ಆಹ್ವಾನಿಸಿದ್ದು, ಯಾವುದೇ ಆಕ್ಷೇಪಣೆಗಳು / ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅಥವಾ ಕನ್ನಡ ದಿನಪತ್ರಿಕೆಯಲ್ಲಿ ಯಾವುದರಲ್ಲಿ ತಡವಾಗಿ ಪ್ರಕಟವಾಗುವುದೋ ಆ ದಿನಾಂಕದಿಂದ 32 ದಿವಸದೊಳಗಾಗಿ ಕಳುಹಿಸಿಕೊಟ್ಟಲ್ಲಿ ಕೃಷಿ ಮಾರಾಟ ನಿರ್ದೇಶಕರು ಪರಿಶೀಲಿಸುವರು. ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು–01 ಇವರ ವಿಳಾಸಕ್ಕೆ ಕಳುಹಿಸಿಕೊಡಬಹುದು.

**PR 104** **ನಿರ್ದೇಶಕರು**